

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1042 |
| ಸದಸ್ಯರ ಹೆಸರು | ಶ್ರೀ ಗೋವಿಂದ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಸೈಜುಕಲ್ಲು ಹೊಡೆಯುವ ಕಲ್ಲು ಕುಟುಕರುಗಳಿಗೆ ಸ್ಥಳೀಯ ಅಧಿಕಾರಿಗಳು ವಿನಾಕಾರಣ ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮಗಳಂತೆ ಕಲ್ಲುಗಣಿ ಗುತ್ತಿಗೆ ಪಡೆಯದೆ ಅಕ್ರಮ ಗಣಿಗಾರಿಕೆ ನಡೆಸುವವರ ವಿರುದ್ಧ ಎಂ.ಎಂ. (ಡಿ&ಆರ್) ಕಾಯ್ದೆ, 1957 ಹಾಗೂ ಕೆ.ಎಂ.ಎಂ.ಸಿ.ಆರ್ 1994ರ ನಿಯಮಗಳಂತೆ ಮೊಕದ್ದಮೆಗಳನ್ನು ದಾಖಲಿಸಲು ಹಾಗೂ ದಂಡ ವಿಧಿಸಿ ಸಂಗ್ರಹಿಸಲು ಕ್ರಮ ವಹಿಸಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಈ ರೀತಿ ಅನಗತ್ಯ ತೊಂದರೆ ನೀಡುತ್ತಿರುವುದರಿಂದ ಕಲ್ಲು ಕುಟುಕರ ಜೀವನೋಪಾಯಕ್ಕೆ ತೊಂದರೆಯಾಗುವುದಿಲ್ಲವೇ; | ದಿನಾಂಕ 12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ನ್ನು ಜಾರಿಗೊಳಿಸಿದ್ದು, ಅದರನ್ವಯ, ಸರ್ಕಾರಿ ಜಮೀನಿನಲ್ಲಿರುವ ಉಪಖನಿಜ ನಿಕ್ಷೇಪಗಳನ್ನು ತೆಗೆಯಲು ಹರಾಜು ಮೂಲಕವೇ ಗುತ್ತಿಗೆಗಳನ್ನು ಮಂಜೂರು ಮಾಡಬೇಕಾಗಿರುತ್ತದೆ.<br><br>ಆದಾಗ್ಯೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ವಂಶ ಪಾರಂಪರಿಕವಾಗಿ ಕಲ್ಲು ಗಣಿಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವ ವ್ಯಕ್ತಿಗಳು / ನೋಂದಾಯಿತ ಸಂಘ ಸಂಸ್ಥೆಗಳು ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ಹರಾಜು ರಹಿತವಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲು ನಿಯಮ 3-F ರಲ್ಲಿ ಅವಕಾಶ ಕಲ್ಪಿಸಲಾಗಿದೆ.<br><br>ನಿಯಮ 31-B ರಂತೆ ಹರಾಜು ಮೂಲಕ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡುವ ವಿಸ್ತೀರ್ಣದ ಶೇಕಡ 25 ರಷ್ಟು ಪ್ರದೇಶವನ್ನು ನಿಯಮ 3-F ರಂತೆ ಹರಾಜು ರಹಿತವಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಬಹುದಾಗಿದೆ.<br><br>**ಕೋಲಾರ** ಜಿಲ್ಲಾ ವ್ಯಾಪ್ತಿಯಲ್ಲಿ 233 ಬ್ಲಾಕ್ ಗಳನ್ನು ಗುರುತಿಸಲಾಗಿದ್ದು, 16 ಬ್ಲಾಕುಗಳಲ್ಲಿ ಕಲ್ಲುಗಣಿ ಗುತ್ತಿಗೆ ಮಂಜೂರಾತಿ ಸಂಬಂಧ ಕಂದಾಯ ಮತ್ತು ಅರಣ್ಯ ಇಲಾಖೆಯಿಂದ ನಿರಾಕ್ಷೇಪಣಾ ಪತ್ರಗಳು ಸ್ವೀಕೃತವಾಗಿರುತ್ತವೆ. ಇವುಗಳ ಪೈಕಿ 8 ಬ್ಲಾಕ್ ಗಳಲ್ಲಿ ಕಲ್ಲುಗಣಿ ಗುತ್ತಿಗೆ ಮಂಜೂರಾತಿ ನೀಡಲಾಗಿರುತ್ತದೆ. 8 ಬ್ಲಾಕುಗಳಿಗೆ ಸಂಬಂಧಿಸಿದಂತೆ ಗುತ್ತಿಗೆ ಮಂಜೂರಾತಿಗೆ ಸಾರ್ವಜನಿಕರಿಂದ ಅರ್ಜಿಗಳನ್ನು ಆಹ್ವಾನಿಸುವ ಕಾರ್ಯವು ಪ್ರಗತಿಯಲ್ಲಿರುತ್ತದೆ. |

--2

| | | |
|---|---|---|
| | | **ಚಿಕ್ಕಬಳ್ಳಾಪುರ** ಜಿಲ್ಲಾ ವ್ಯಾಪ್ತಿಯಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016ರ ನಿಯಮ 3-F ರಂತೆ ಕಟ್ಟಡ ಕಲ್ಲಿನ ನಿಕ್ಷೇಪದ ಬ್ಲಾಕ್‌ಗಳನ್ನು ಗುರುತಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| **ಇ)** | ಹಾಗಿದ್ದಲ್ಲಿ, ಸ್ಥಳೀಯ ಅಧಿಕಾರಿಗಳ ವಿರುದ್ಧ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಪ್ರತಿಭಟನೆಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಪ್ರತಿಭಟನೆಗಳ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಈವರೆವಿಗೂ ನಡೆದಿರುವ ಪ್ರತಿಭಟನೆಗಳಲ್ಲಿ ಸಲ್ಲಿಸಿರುವ ಮನವಿಗಳನ್ನು ಜಿಲ್ಲಾ ಟಾಸ್ಕ್ ಫೋರ್ಸ್ (ಗಣಿ) ಸಮಿತಿಯಲ್ಲಿ ಪರಿಶೀಲಿಸಿ, ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |
| **ಈ)** | ಕಲ್ಲು ಕುಟುಕರುಗಳ ರಕ್ಷಣೆ ಹಾಗೂ ಜೀವನೋಪಾಯಕ್ಕೆ ಸರ್ಕಾರ ಯಾವುದಾದರೂ ಯೋಜನೆಗಳನ್ನು ರೂಪಿಸಿದೆಯೇ; | ಹೌದು.<br><br>ದಿನಾಂಕ 12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016 ನ್ನು ಜಾರಿಗೊಳಿಸಿದ್ದು, ಅದರನ್ವಯ, ಸರ್ಕಾರಿ ಜಮೀನಿನಲ್ಲಿರುವ ಉಪಖನಿಜ ನಿಕ್ಷೇಪಗಳನ್ನು ತೆಗೆಯಲು ಹರಾಜು ಮೂಲಕವೇ ಗುತ್ತಿಗೆಗಳನ್ನು ಮಂಜೂರು ಮಾಡಬೇಕಾಗಿರುತ್ತದೆ.<br><br>ಆದಾಗ್ಯೂ, ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ವಂಶ ಪಾರಂಪರಿಕವಾಗಿ ಕಲ್ಲು ಗಣಿಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವ ವ್ಯಕ್ತಿಗಳು / ನೋಂದಾಯಿತ ಸಂಘ ಸಂಸ್ಥೆಗಳು ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ಹರಾಜು ರಹಿತವಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲು ನಿಯಮ 3-F ರಲ್ಲಿ ಅವಕಾಶ ಕಲ್ಪಿಸಲಾಗಿದೆ.<br><br>ಜಿಲ್ಲೆಯಲ್ಲಿ ನಿಯಮ 31-B ರಂತೆ ಹರಾಜು ಮೂಲಕ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲು ಗುರುತಿಸಿರುವ ವಿಸ್ತೀರ್ಣದ ಶೇಕಡ 25ರಷ್ಟು ಪ್ರದೇಶವನ್ನು ನಿಯಮ 3-F ರಂತೆ ಹರಾಜು ರಹಿತವಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಬಹುದಾಗಿದೆ. |
| **ಉ)** | ಹಾಗಿದ್ದಲ್ಲಿ, ಯಾವ ಯಾವ ಯೋಜನೆಗಳನ್ನು ರೂಪಿಸಲಾಗಿದೆ; ಈ ಯೋಜನೆಗಳ ರೂಪು ರೇಷೆಗಳೇನು? (ವಿವರಗಳನ್ನು ನೀಡುವುದು) | |

--3

| | | |
|---|---|---|
| | | ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016ರ ನಿಯಮ 3-F ಪ್ರಕಾರ ವಂಶ ಪಾರಂಪರಿಕವಾಗಿ ಕಲ್ಲುಗಣಿಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವ ವ್ಯಕ್ತಿಗಳು/ನೋಂದಾಯಿತ ಸಂಘ ಸಂಸ್ಥೆಗಳಿಗೆ ಕಲ್ಲುಗಣಿ ಗುತ್ತಿಗೆ ನೀಡಲು ಶೇಕಡ 24 ರಷ್ಟು ಮೀಸಲಾತಿ ನಿಗದಿಪಡಿಸಿದೆ.<br><br>ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ವಂಶ ಪಾರಂಪರಿಕವಾಗಿ ಕಲ್ಲು ಗಣಿಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವ ವ್ಯಕ್ತಿಗಳು / ನೋಂದಾಯಿತ ಸಂಘ ಸಂಸ್ಥೆಗಳಿಗೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಬ್ಲಾಕ್ ಗಳನ್ನು ಗುರುತಿಸಿ ನಿಯಮ 8(5)ರಂತೆ ಕಂದಾಯ ಮತ್ತು ಅರಣ್ಯ ಇಲಾಖೆಯಿಂದ ನಿರಾಕ್ಷೇಪಣಾ ಪತ್ರಗಳನ್ನು ಪಡೆದು, ಕಟ್ಟಡ ಕಲ್ಲುಗಣಿ ಗುತ್ತಿಗೆ ಮಂಜೂರಾತಿ ನೀಡಲು ಅವಕಾಶ ಕಲ್ಪಿಸಲಾಗಿದೆ. |

ಸಂಖ್ಯೆ ಸಿಐ 482 ಎಂಎಂಎನ್ 2021

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.